ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

M.Sand ಘಟಕಗಳ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು):-

1097 (1153) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಎಷ್ಟು ಘಟಕಗಳಿವೆ ; ಈ ಘಟಕಗಳಿಂದ ವರ್ಷಕ್ಕೆ ಎಷ್ಟು ಟನ್ ಎಂ.ಸ್ಯಾಂಡ್ ಉತ್ಪಾದನೆಯಾಗುತ್ತದೆ ; (ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಈ ಘಟಕಗಳಲ್ಲಿ ಉತ್ಪಾದನೆಯಾಗುವ ಒಂದು ಟನ್ ಎಂ. ಸ್ಯಾಂಡ್‌ಗೆ ಸರ್ಕಾರವು ಎಷ್ಟು ಮೊತ್ತವನ್ನು ನಿಗಧಿ ಮಾಡಿದೆ;

(ಇ) ಸರ್ಕಾರವು ವಿದೇಶದಿಂದ ಎಷ್ಟು ಟನ್ ಎಂ.ಸ್ಯಾಂಡ್ ಆಮದು ಮಾಡಿಕೊಂಡಿದೆ ; ಇದಕ್ಕೆ ಎಷ್ಟು ಮೊತ್ತವನ್ನು ಪಾವತಿಸಲಾಗಿದೆ; ವಿದೇಶದಿಂದ ಆಮದು ಮಾಡಿಕೊಳ್ಳಲಾದ ಟನ್ ಒಂದಕ್ಕೆ ಸರ್ಕಾರ ನಿಗಧಿಪಡಿಸಿದ ಮೊತ್ತವೆಷ್ಟು ;

(ಈ) ಸರ್ಕಾರವು ಕಳೆದ 3 ವರ್ಷಗಳಲ್ಲಿ ಎಷ್ಟು ಪ್ರಮಾಣದ ಮರಳನ್ನು ವಿದೇಶಗಳಿಂದ ಆಮದು ಮಾಡಿಕೊಂಡಿದೆ ; ಅದರಲ್ಲಿ ಗ್ರಾಹಕರಿಗೆ ಮಾರಾಟ ಮಾಡಲಾದ ಮರಳಿನ ಪ್ರಮಾಣವೆಷ್ಟು ; ಈ ಮರಳನ್ನು ಎಲ್ಲಿ ಸಂಗ್ರಹಿಸಿಡಲಾಗಿದೆ ?